ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ತುಮಕೂರು ಮಹಾನಗರ ಪಾಲಿಕೆಯ ತೆರಿಗೆ ವಸೂಲಾತಿ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

089 (487) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ತುಮಕೂರು ಮಹಾನಗರ ಪಾಲಿಕೆಯಲ್ಲಿ ಕಳೆದ ಎರಡು ವರ್ಷಗಳಲ್ಲಿ ವಸೂಲಿ ಮಾಡಿರುವ ತೆರಿಗೆ ಹಣವೆಷ್ಟು ;

(ಆ) ತುಮಕೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುವ ಆಸ್ತಿ-ಪಾಸ್ತಿಗಳ ಸಂಖ್ಯೆ ಎಷ್ಟು ;

(ಇ) ಈ ಆಸ್ತಿ ಪಾಸ್ತಿಗಳಲ್ಲಿ ತೆರಿಗೆ ಬಾಕಿ ಉಳಿಸಿಕೊಂಡಿರುವ ಸ್ವತ್ತುಗಳೆಷ್ಟು ; (ಮನೆ/ವಾಣಿಜ್ಯ ಕಟ್ಟಡಗಳು/ಸಂಘ ಸಂಸ್ಥೆಗಳು/ಕಾರ್ಖಾನೆ/ಗಾರ್ಮೆಂಟ್ಸ್ ಇತರೆ ಸೇರಿದಂತೆ ವಿವರ ನೀಡುವುದು)

(ಈ) ಬಾಕಿ ಉಳಿಸಿಕೊಂಡಿರುವ ತೆರಿಗೆಯನ್ನು ವಸೂಲು ಮಾಡಲು ಇದುವರೆವಿಗೂ ಕೈಗೊಂಡಿರುವ ಕ್ರಮಗಳ ಬಗ್ಗೆ ವಿವರ ನೀಡುವುದು ?